ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ಕರ್ನಾಟಕ ರಾಜ್ಯ ಖನಿಜ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ಗಣಿಗಾರಿಕೆಗೆ ಗುತ್ತಿಗೆ ನೀಡುತ್ತಿರುವ ಕುರಿತು

ಶ್ರೀ ನಿರಾಣಿ ಹನುಮಂತ್ ರುದ್ರಪ್ಪ(ಪದವೀಧರರ ಕ್ಷೇತ್ರ):-

1536 (1817) ಮಾನ್ಯ ಬೃಹತ್ ಮತ್ತು ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ರಾಜ್ಯ ಖನಿಜ ಅಭಿವೃದ್ಧಿ ನಿಗಮ ನಿಯಮಿತ (ಎಂ.ಎಂ.ಎಲ್) ದಿಂದ ಇಲ್ಲಿಯವರೆಗೂ ರಾಜ್ಯದಲ್ಲಿ ಎಷ್ಟು ಜನರಿಗೆ ಮತ್ತು ಎಷ್ಟು ಸಂಸ್ಥೆಗಳಿಗೆ ಗಣಿಗಾರಿಕೆಗೆ ಗುತ್ತಿಗೆ (ಲೀಸ್) ನೀಡಲಾಗಿದೆ ; ಯಾವ ಯಾವ ಖನಿಜಗಳನ್ನು ಹೊರ ತೆಗೆಯಲು ಅನುಮತಿ ನೀಡಲಾಗಿದೆ; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು)

(ಆ) ಸದರಿ ನಿಗಮದಿಂದ ಸುಣ್ಣಕಲ್ಲು (ಲೈಮ್‌ಸ್ಟೋನ್) ಮತ್ತು ಡೋಲೋಮೆಟ್ ಖನಿಜಗಳ ಗಣಿಗಾರಿಕೆಗಾಗಿ ರಾಜ್ಯದಲ್ಲಿ ಇಲ್ಲಿಯವರೆಗೂ ಒಟ್ಟು ಎಷ್ಟು ಜನರಿಗೆ/ಸಂಸ್ಥೆಗಳಿಗೆ ಅನುಮತಿ ನೀಡಲಾಗಿದೆ;

(ಇ) ನಿಗಮದಿಂದ ಲೀಸ್ ಪಡೆದ ಪ್ರತಿಯೊಬ್ಬರಿಗೆ ಅಥವಾ ಪ್ರತಿ ಸಂಸ್ಥೆಗೆ ನೀಡಲಾಗಿರುವ ಲೀಸ್‌ನ ಅವಧಿ ಎಷ್ಟು; ಯಾವ ದಿನಾಂಕದಿಂದ ಮತ್ತು ಎಷ್ಟು ಎಕರೆ ಪ್ರದೇಶದಲ್ಲಿ ಎಷ್ಟು ಘನ/ವಿಸ್ತೀರ್ಣ ಗಣಿಗಾರಿಕೆಗೆ ಅನುಮತಿ ನೀಡಲಾಗಿದೆ;

(ಈ) ಲೀಸ್ ಪಡೆದ ಪ್ರತಿಯೊಬ್ಬರಿಗೂ ಇಲ್ಲಿಯವರೆಗೂ ಎಷ್ಟು ಪ್ರಮಾಣದ ಖನಿಜವನ್ನು ಹೊರ ತೆಗೆದಿರುತ್ತಾರೆ ;

(ಉ) ಕ.ರಾ.ಖ.ಅನಿ.ನಿಗೆ ಗಣಿಗಾರಿಕೆಯಿಂದ ಎಷ್ಟು ಆದಾಯ ಬಂದಿರುತ್ತದೆ; ಕಳೆದ 3 ವರ್ಷಗಳಿಂದ ಪ್ರತಿ ವರ್ಷವಾರು ಪ್ರತಿ ಖನಿಜವಾರು ಮಾಹಿತಿ ನೀಡುವುದು;

(ಊ) ನಿಗಮದಿಂದ ಇಲ್ಲಿಯವರೆಗೂ ಎಷ್ಟು ಜನರಿಗೆ/ಸಂಸ್ಥೆಗಳಿಗೆ ಗುತ್ತಿಗೆಯನ್ನು ಬಿಟ್ಟು ಕೊಡಲಾಗಿದೆ; ಮತ್ತು ಗುತ್ತಿಗೆಯನ್ನು ವರ್ಗಾಯಿಸಲಾಗಿದೆ;

(ಋ) ರಾಜ್ಯದಲ್ಲಿ ಸ್ವಂತ ಗಣಿಗಾರಿಕೆಯನ್ನು ಹೊಂದಿರುವ ಕಾರ್ಖಾನೆಗಳ ಸಂಖ್ಯೆ ಎಷ್ಟು ; ಅವುಗಳಲ್ಲಿ ಪ್ರಸ್ತುತ ಎಷ್ಟು ಕಾರ್ಖಾನೆಗಳು ಕಾರ್ಯನಿರ್ವಹಿಸುತ್ತಿವೆ ;

(ಎ) ಸದರಿ ಕಾರ್ಖಾನೆಗಳಲ್ಲಿ ಸ್ಥಳೀಯರಿಗೆ ಉದ್ಯೋಗಾವಕಾಶ ಸರ್ಕಾರ ಕೈಗೊಂಡಿರುವ ಕ್ರಮಗಳೇನು ?